# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 752

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಬಿ.ಕೆ. ಹರಿಪ್ರಸಾದ್ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 15.12.2020

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಒಟ್ಟು ನ್ಯಾಯಬೆಲೆ ಅಂಗಡಿಗಳ ಸಂಖ್ಯೆ ಎಷ್ಟು; ನ್ಯಾಯ ಬೆಲೆ ಅಂಗಡಿಗಳ ಪರವಾನಿಗೆಯನ್ನು ಹೊಂದಲು ಇರಬೇಕಾದ ಅರ್ಹತೆಗಳೇನು; | ಪ್ರಸ್ತುತ ರಾಜ್ಯದಲ್ಲಿ ಒಟ್ಟು 19,952 ನ್ಯಾಯಬೆಲೆ ಅಂಗಡಿಗಳು ಕಾರ್ಯನಿರ್ವಹಿಸುತ್ತವೆ:<br>ಹೊಸ ನ್ಯಾಯಬೆಲೆ ಅಂಗಡಿಗಳಿಗೆ ಅರ್ಜಿ ಸಲ್ಲಿಸಲು ಕರ್ನಾಟಕ ಅಗತ್ಯ ವಸ್ತುಗಳ (ಸಾವಿಪ) ನಿಯಂತ್ರಣ ತಿದ್ದುಪಡಿ ಆದೇಶ ದಿನಾಂಕ: 21-05-2018ರಂತೆ ಕೆಳಕಂಡಂತೆ ಆದ್ಯತಾ ಮಾನದಂಡ ನಿಗಧಿಪಡಿಸಲಾಗಿದೆ.<br>ಎ) ಸರ್ಕಾರದ ನಿಗಮಗಳು/ಗ್ರಾಮ ಪಂಚಾಯಿತಿ/ಸ್ಥಳೀಯ ನಗರ ಸಂಸ್ಥೆಗಳು<br>ಬಿ) ಸಹಕಾರ ಸಂಘಗಳು.<br>1. ಟಿಎಪಿಸಿಎಂಎಸ್/ಕೋ-/ಆಪರೇಟಿವ್ ಮಾರ್ಕೆಂಟಿಂಗ್ ಸೊಸೈಟಿಗಳು.<br>2. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು/ ವಿ.ಎಸ್.ಎಸ್.ಎನ್<br>3. ಹಾಫ್ ಕಾಮ್ಸ್.<br>4. ಅಧಿಕೃತ ನೋಂದವಣಿಯಾದ ಸಹಕಾರ ಸಂಘಗಳು<br>5. ಅಧಿಕೃತ ನೋಂದಣಿಯಾದ ಪ್ರಾಥಮಿಕ ಬಳಕೆದಾರರ ಸಹಕಾರ ಸಂಘಗಳು<br>6. ನೋಂದಣಿಯಾದ ಆದಿವಾಸಿ ವಿವಿದ್ದೋದ್ದೇಶ ಸಹಕಾರ ಸಂಘಗಳು.<br>7. ನೋಂದಣಿಯಾದ ನೇಕಾರರ ಸಹಕಾರ ಸಂಘಗಳು<br>8. ನೋಂದಣಿಯಾದ ಮಹಿಳಾ ವಿವಿದ್ದೋದ್ದೇಶ ಸಹಕಾರ ಸಂಘಗಳು<br>9. ನೋಂದಣಿಯಾದ ವಿವಿದ್ದೋದ್ದೇಶ ಸಹಕಾರ ಸಂಘಗಳು<br>10. ಅಂಗವಿಕಲ ಕಲ್ಯಾಣ ಸಹಕಾರ ಸಂಘಗಳು<br>11. ಸಹಕಾರ ಸಂಘಗಳು ನಡೆಸುವ ಬ್ಯಾಂಕ್ ಅಥವಾ ಕೋ-ಆಪರೇಟಿವ್ ಬ್ಯಾಂಕುಗಳು.<br>ಸಿ) ಖಾಸಗಿ-ವಿಕಲಚೇತನರ ವರ್ಗBench mark disability (ಪ್ರಾರಂಭಿಕವಾಗಿ 400 ನ್ಯಾಯಬೆಲೆ ಅಂಗಡಿಗಳು) ಮತ್ತು |

| | | |
|---|---|---|
| | | ಮಂಗಳಮುಖಿಯರ ವರ್ಗ (ಪ್ರಾರಂಭಿಕವಾಗಿ 30 ನ್ಯಾಯಬೆಲೆ ಅಂಗಡಿಗಳು)- ಮೇಲ್ಕಂಡ ಸಹಕಾರ ಸಂಘಗಳ ಗುಣಮಟ್ಟವನ್ನು ಅವರಿಗೆ ನೀಡಲಾಗಿರುವ ಎ,ಬಿ ಮತ್ತು ಸಿ ಶ್ರೇಣಿಯ ಆಡಿಟ್ ವರದಿಯನ್ನು ಪರಿಗಣಿಸಲಾಗುವುದು ಮತ್ತು ಸದರಿ ಸಹಕಾರ ಸಂಘಗಳು 03 ವರ್ಷಗಳಿಗಿಂತ ಹಿಂದಿನವುಗಳಾಗಿರಬೇಕು ಹಾಗೂ ಕಳೆದ 2 ವರ್ಷಗಳಿಂದ ನಿರಂತರವಾಗಿ ರೂ.200000/-ದಷ್ಟು ಮೊತ್ತದ ಬ್ಯಾಂಕ್ ಬ್ಯಾಲೆನ್ಸ್ ಹೊಂದಿರಬೇಕು. ಆದೇಶದ ಕಂಡಿಕೆ(5)(ಬಿ) ರನ್ವಯ 2 ತಿಂಗಳ ಪಡಿತರ ಹಂಚಿಕೆಯ ಆಹಾರಧಾನ್ಯ ಪ್ರಮಾಣವನ್ನು ಶೇಖರಿಸಿಡಲು ಸಾಕಷ್ಟು ಸಂಗ್ರಹಣಾ ಸಾಮರ್ಥ್ಯದ ಮಳಿಗೆ ಜಾಗವನ್ನು ಕೂಡ ಹೊಂದಿರಬೇಕು. |
| ಆ | ಒಂದು ನ್ಯಾಯಬೆಲೆ ಅಂಗಡಿಗೆ ಎಷ್ಟು ಕುಟುಂಬಗಳಿಗೆ ಪಡಿತರ ನೀಡಲು ಅನುಮತಿ ನೀಡಲಾಗುವುದು; | ಕರ್ನಾಟಕ ಅಗತ್ಯ ವಸ್ತುಗಳ ಸಾರ್ವಜನಿಕ ವಿತರಣಾ ಪದ್ಧತಿ ನಿಯಂತ್ರಣ ಆದೇಶ 2016ರನ್ವಯ ನಗರ ಪ್ರದೇಶದಲ್ಲಿ ಪ್ರತಿ ನ್ಯಾಯಬೆಲೆ ಅಂಗಡಿಗೆ ಕನಿಷ್ಠ 800 ಮತ್ತು ಗ್ರಾಮಾಂತರ ಪ್ರದೇಶದಲ್ಲಿ ಪ್ರತಿ ನ್ಯಾಯಬೆಲೆ ಅಂಗಡಿಗೆ ಕನಿಷ್ಠ 500 ಪಡಿತರ ಚೀಟಿಗಳನ್ನು ನಿಯೋಜನೆ ಮಾಡಲಾಗಿರುತ್ತದೆ. |
| ಇ | ಸರ್ಕಾರ ಹಂಚಿಕೆ ಮಾಡಿದ ಪಡಿತರವು ವಿತರಣೆಯಾಗದಿದ್ದಲ್ಲಿ ಅದನ್ನು ಸರ್ಕಾರ ವಾಪಸ್ಸು ಪಡೆದುಕೊಳ್ಳುವುದೇ ಅಥವಾ ಮುಂದಿನ ತಿಂಗಳಿಗೆ ಹೊಸದಾಗಿ ಪಡಿತರ ಹಂಚಿಕೆ ಮಾಡುವಾಗ ಉಳಿಕೆಯನ್ನು ಸಹ ಲೆಕ್ಕ ಹಾಕುವುದೇ? | ಪ್ರತಿ ಮಾಹೆಯ ಅಂತ್ಯಕ್ಕೆ ಸಗಟು ಗೋದಾಮು ಹಾಗೂ ನ್ಯಾಯಬೆಲೆ ಅಂಗಡಿಗಳಲ್ಲಿ ಉಳಿಕೆಯಾಗುವ ಆಹಾರ ಧಾನ್ಯಗಳ ಪ್ರಮಾಣವನ್ನು ಅಂತಿಮ ಶಿಲ್ಕಾಗಿ ಪರಿಗಣಿಸಿ ಮುಂದಿನ ತಿಂಗಳ ಹಂಚಿಕೆಯನ್ನು ನೀಡಲಾಗುತ್ತದೆ. |

ಆನಾಸ 74 ಆನಾಸ 2020 (ಇ-ಆಫೀಸ್)

(ಕೆ.ಗೋಪಾಲಯ್ಯ)

ಆಹಾರ, ನಾಗರಿಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಹಾಗೂ

ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.